# ಆರು ಆಣೆ ಬೆಲೆಯ ಪುಸ್ತಕಗಳು

## ಏಕಾಂಕ ನಾಟಕಗಳು

೧ ವೀರ ಅಭಿಮನ್ಯು
೨ ರಾಮರಾಜ್ಯ
೩ ದಾನಶೂರ ಕರ್ಣ
೪ ಯಾರ ತಪ್ಪು
೫ ನನ್ನ ಮರ್ಜಿ
೬ ಅಳಿಯ
೭ ಮಾವನ ಆಸ್ತಿ
೮ ಸೇರಿಗೆ ಸವ್ವಾಸೇರು
೯ ಗುಟ್ಟಿನ ಪೆಟ್ಟು
೧೦ ಓಸಿ ಮಲ್ಲೇಶಿ
೧೧ ಕಲ್ಯಾಣಜ್ಯೋತಿ ಬಸವೇಶ್ವರ
೧೨ ರಥಾ ಸಾರಥಿ
೧೩ ಅಳಿಯ ದೇವರು
೧೪ ಪತಿ ಪೂಜೆ
೧೫ ಉತ್ತರಕುಮಾರ

## ಇತರ ಪುಸ್ತಕಗಳು

೧೬ ಹಳ್ಳಿಯ ಹಾಡು
೧೭ ಲಾವಣಿ ಪದಗಳು
೧೮ ಸಿನೆಮಾ ಕನ್ನಡ ಹಾಡು
೧೯ ಬ್ರಹ್ಮಾನಂದ ಭಜನೆ
೨೦ ಕಬೀರ ದಾಸರ ಭಜನೆ
೨೧ ಹಂತಿ ಹಾಡುಗಳು
೨೨ ಪುರಂದರ ದಾಸರ ಭಜನೆ
೨೩ ನಗೆ ಬರಹಗಳು
೨೪ ಸ್ತ್ರೀನೀತಿ ಬೋಧೆ
೨೫ ವನಿತೆಯರ ಮಂಗಳ ಹಾಡು
೨೬ ದಂಪತಿ ಒಗಟುಗಳು
೨೭ ಸಾಯಿಬಾಬಾ ಚರಿತ್ರೆ
೨೮ ನೀತಿ ಕಥಾವಳಿ
೨೯ ನೆಲ್ಲೂರ ನಂಬೆಕ್ಕ
೩೦ ಕೈಚಳಕ ವಿದ್ಯಾ ರಹಸ್ಯ
೩೧ ಶಿವಲೀಲಾಮೃತ
೩೨ ಐತಿಹಾಸಿಕ ಮಹಾವ್ಯಕ್ತಿಗಳು
೩೩ [illegible]
೩೪ ಮನೋರಂಜಕ ಕಥೆಗಳು
೩೫ ನಿರುದ್ಯೋಗ ನಿವಾರಣೆ
೩೬ ಆರುಭಾಷಾ ಶಿಕ್ಷಕ
೩೭ ಶ್ರೀ ಕ್ಷೇತ್ರ ಉಳವಿ ಮಹಾತ್ಮೆ
೩೮ ಶ್ರೀಕ್ಷೇತ್ರಗೋಕರ್ಣಮಹಾತ್ಮೆ
೩೯ ಮೂಹೂರ್ತ ದರ್ಶನ
೪೦ ಶಿವರಾತ್ರಿ ಮಹಿಮೆ
೪೧ ಭಗವದ್ಗೀತಾ
೪೨ ಶನಿದೇವರ ಮಹಾತ್ಮೆ
೪೩ ಪ್ರಶ್ನ ಚಿಂತಾಮಣಿ
೪೪ ವರ್ಷ ಭವಿಷ್ಯ
೪೫ ವೆಂಕಟೇಶ ಮಹಾತ್ಮೆ
೪೬ ರೇಣುಕಾ ಮಹಾತ್ಮೆ
೪೭ ಹರಿಭಕ್ತರ ಕಥೆಗಳು
೪೮ ಭಾರತದ ಕರ್ಮಯೋಗಿಗಳು
೪೯ ಸರ್ವಜ್ಞ ವಚನ
೫೦ ಅಕ್ಕಮಹಾದೇವಿ ವಚನ
೫೧ ಶ್ರೀ ಬಸವೇಶ್ವರ ವಚನ
೫೨ ೧೬ ಸೋಮವಾರ ವ್ರತಕಥೆ
೫೩ ಶಿವಭಜನೆ ಮಂಗಳಾರತಿ

# ಅಂಬಿಗರ ಚೌಡಯ್ಯನ ವಚನಗಳು



೦

ಸಂಗ್ರಹಕಾರರು:

ಎಂ. ಜೀವನ



ಪ್ರಕಾಶಕರು:

ಎ. ಎಮ್. ಕರಡಿ ಬುಕ್ ಸೇಲರ,

ಸ್ಟೇಶನ್ ರೋಡ, ಹುಬ್ಬಳ್ಳಿ.



ಮುದ್ರಕರು:—ಆರ್. ಜಿ. ಬಾಕಳೆ,

ಶ್ರೀ ರೇಣುಕಾ ಪ್ರಿಂಟಿಂಗ ಪ್ರೆಸ್, ಡಾ|| ಮುಕರ್ಜಿ ರೋಡ,

ಹುಬ್ಬಳ್ಳಿ.

೧೯೫೮ ) ( ಬೆಲೆ: ೦-೬-೦

# ವಚನ ಕಾರನ ಬಗ್ಗೆ

ಹೆಸರೇ ಸೂಚಿಸುವಂತೆ ಚೌಡಯ್ಯನು ಅಂಬಿಗರವನು. ಅದೇ ಕಾಯಕದಲ್ಲಿದ್ದುಕೊಂಡು ಶಿವಶರಣನಾದುದಲ್ಲದೆ ವಚನ ಕಾರಣ ಆದಂಥವನ್ನು. ಈತನ ವ್ಯಕ್ತಿತ್ವವು ಸಾಮಾನ್ಯವಾದುದಲ್ಲವೆಂಬುದನ್ನು—

"ಬಸವಣ್ಣ ಮಾಡುವ ಭಕ್ತಿ ಶಿಶುವೆಲ್ಲ ಮಾಡಬಹುದಯ್ಯ!"

ಎಂಬ ವಚನದಿಂದ ಕಂಡುಕೊಳ್ಳಬಹುದು. ಚೌಡಯ್ಯನು ಮಹಾ ನಿಷ್ಠುರಿ. ಆತನು ಯಾರನ್ನು ಕ್ಷಮಿಸುವದಿಲ್ಲ. "ಕತೆ ತೊಟ್ಟವನು ರಾಯಲ್ಲಿ ಕಾವಿಹೊತ್ತವ ಜಂಗಮನಲ್ಲ!" ಎಂಧು ಹೇಳುವ ವರೆಗೂ ಅವನು ಮುಂದು ವರಿದಿದ್ದಾನೆ. ಅಲ್ಲದೆ ಕುಲಹೀನನಾದ ಶಿಷ್ಯನಿಗೆ ಅನುಗ್ರಹ ಮಾಡಿದ ನಂತರ ಅವನ ಮನೆಯೊಳಗೆ ಊಟಮಾಡದೆ 'ಪಡಿ' ಯನ್ನು ಒಯ್ಯುವಂಥ ಗುರುವಿಗೆ—

"..........ಕೆಡವಿ ಹಾಕಿ ಮೂಗನೇ ಕೊಯ್ದು......ನಿಂ ಹುಳಿಯ ಹಿಂಡಿ, ಪಡುವ ಗಾಳಿಗೆ ಹಿಡಿ........"

ಎಂದು ಹೇಳಲೂ ಹಿಂದೆ ಮುಂದೆ ನೋಡಿಲ್ಲ. ಹನ್ನೆರಡನೆಯ ಶತ ನವಿದೆ, ಮಾನದ ಶರಣರಲ್ಲಿ ಚೌಡಯ್ಯನಿಗೂ ಒಂದು ಮಹತ್ವದ ಸ್ ಪ್ರಸ್ತುತ ಎಂಬುದು ಆವನ ವಚನಗಳಿಂದಲೇ ಕಂಡುಕೊಳ್ಳಬಹುದಾಗಿದೆ. ದ ಆಯ್ದ ಪುಸ್ತಕದಲ್ಲಿನ ವಚನಗಳನ್ನು ಕೈ ಬರೆಹವ ಪ್ರತಿಯೊಂದರೊಳಗಿಂ ಎಂದು, ವುಗಳಾಗಿವೆ. ಇವುಗಳು ಓದುಗರಿಗೆ ಹಿಡಿಸಬಹುದೆಂದು ನಂಬಿದ್ದೇನೆ.

ದಿಗೆ—

ಉಣಕಲ್ಲ ( ಹುಬ್ಬಳ್ಳಿ. )

ವಂದನೆಗಳೊಂ

ತಾ|| ೨೪—೨—೧೯೫೮

ಎಂ. ಜೀವ

—೧—

ಓಂ ನಮಃ ಶಿವಾಯ|

ಐಶ್ವರ್ಯ ದುಃಖದಲ್ಲಿ ಬೇಯುವ ಹೊಲೆ ಸಂಸಾರವನೆ ಕಚ್ಚಿ
ಕೊಲೆ ಗೀಡಿಡವೆ—ಸತಿ ಸತ್ಯ ಸದಾಚಾರದಲಿ ನಡಿ.
ಸಚಿಯನೆ ಬಿಡು. ದಿಟವನೆ ಹಿಡಿ, ಈ ಘಟವುಳ್ಳನಕ ಕಾಲದಲ್ಲಿ.
ಶಿವ ಭಕ್ತಿಯ ನಟಿಸಿ ನಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ

—೨—

ಪರಪುರುಷಾರ್ಥವ ನರಿಯದ ಶೆಟ್ಟಿ ನರ ಗುರಿಗಳು ನೀವು ಕೇಳಿ
ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು.
ಮರಳಿ ಕೊಟ್ಟದ್ದಕ್ಕೆ ಕೀರ್ತಿದೇಹಮಂ ಪಡವವರ ಪರಿಯ ಕೇಳು
ಶಿ[illegible] ಮನದೊಳಗೆ ಪರಪುರುಷಾರ್ಥಿಯಾದರೆ ವೀರ ವಿಕ್ರಮ ನಂತ
[illegible]ರಪುರುಷಾರ್ಥಿಯಾದರೆ ಬಸವ ಕುಮಾರ ನಂತಾಗಬೇಕು.
ಪರ ಪರುಷಾರ್ಥಿಯಾದರೆ ಕಪೋತ ಪಕ್ಷಿಯಂತಾಗಬೇಕು.
ಇಂತೀ ಪರ ಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು.
ಹಣವೇನು ದೊಡ್ಡಿತ್ತು? ಹೆಣ್ಣೇನು ದೊಡ್ಡಿತ್ತು? ಮಣ್ಣೇನು ದೊಡ್ಡಿತ್ತು?
ಅನ್ನವೇನು ದೊಡ್ಡಿತ್ತು? ಉದಕವೇನು ದೊಡ್ಡಿತ್ತು?
ವಸ್ತ್ರವೇನು ದೊಡ್ಡಿತ್ತು? ಮತವೇನು ದೊಡ್ಡಿತ್ತು?
ಇಂತಿವುಗಳೊಳ್ ಒಂದನಾದರು ಪರ ಪುರುಷಾರ್ಥಕ್ಕೆ ನೀಡಿ ಮಾಡಷ್ಟೆ,
ತನ್ನ ಶರೀರವ ಹೊರಕೊಂಡು ಬದುಕೇನೆಂಬ ಮುಳಂಗೆ,
ಇಹ ಪರ ನಾಸ್ತಿ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

[illegible]ಜ ಗಂಡನ ಸಂಗವ ನೊಲ್ಲದೆ, ಭುಜಗರ ಸಂಗವ ಮಾಡುತ್ತ,
ಬಾಜಂ ತೊತ್ತಿಗೆಲ್ಲಿಯದೆ ನಿಜ ಮುತ್ತೈದಿತನ,
ತ್ರಿಜಗ ವಂದಿತ ಲಿಂಗವ ಕರ ಕಮಲದಲ್ಲಿ ಪಿಡಿಕೊಂಡಿದನ ಬಳಿಕ.

ಅಲ್ಲಿ ನಂಬಿ ಪೂಜಿಸಿ, ಫಲ ಪದವ ಮುಕ್ತಿಯ, ಪಡಿಯಲರಿಯದೆ,
ಲೋಕದ ಗಜಿಬಿಜಿಯ ದೈವಂಗಳಿಗೆರಗುವ ಕುನ್ನಿ ಮಾನವರ ಕಂಡರೆ,
ಯಮನು ಜಿಗಿದೆಳೆದೊಯ್ದು ಕೊಲ್ಲದಿಪ್ಪನೇ?
ಹಾಗೆ ಸಾಯಲಿಂದಾತ ನಮ್ಮ ಅಂಬಿಗರ ಚೌಡಯ್ಯನು.

—೪—

ಸತ್ತೆಡೆ ಸಂಗಡ ಹೂಳಿಸಿಕೊಂಬ ಲಿಂಗವ, ಹತ್ತಿಯಾಗಿ ನಿಮ್ಮ ಕೊರಳಲ್ಲಿ
ಕಟ್ಟಿದ್ದ ಬಳಿಕ.
ಸತ್ಯ ಭಕ್ತಿಯಿಂದ ನಂಬಲರಿಯದೆ, ಮತ್ತನ್ಯ ದೈವಕ್ಕೆರಗುವ,
ಕತ್ತೆ—ಮೂಳ ಹೊಲೆಯರಿರಾ! ನೀವು ಕೇಳಿರೋ!!
ಗಂಡನ ಸಂಗಡ ಸಮಾಧಿ ಕೊಂಬ ಹೆಂಡರು ಅನಂತ ಅಪೂರ್ವ
ಹೆಂಡರ ಸಂಗ ಸಮಾಧಿಯ ಕೊಂಬ ಗಂಡರುಂಟೇ ಲೋಕದೊಳು?
ಇದನು ಕಂಡಾದರೂ ನಾಚಲಿಲ್ಲವೇ? ಛೀ, ದಿಂಡಿಯ ಮೂಳಿ ಹೊಲೆಯರಿರಾ!
ನಿಮ್ಮ ತನುವಿನ ಹೆಬ್ಬಡೆಯರ ಮುಂದೆ ಒಬ್ಬರಾದರೂ ನಿಲ್ಲಬಹುದೇ?
ಭಂಡಾರವ ಕೊಡು ಎಂದು, ದಿಂಡಿ ದೈವಕ್ಕೆರಗಿದರೆ,
ಅವು ನಿಮ್ಮ ಕೂಡೆ ಒಂದಾದರೂ ಹುಳಿಸಿಕೊಂಡವೇ?
ನೀವು ಮಾಡಿದ ಧನ ಮಂಡ ಹೆಂಡರು ಮಕ್ಕಳು ಒಡನೆ ನಿನ್ನ ಗುಡಿಯಲ್ಲಿ
ನಿಂತಾರೆ?
ಇಂತಿವರಿಗಾಗಿ ಸತ್ತವನ ಬಾಯಲ್ಲಿ ನಾಯಿ ಉಚ್ಚೆಹೊಯ್ಯಿತೆಂಬ
ಗಾದಿಯ ಮಾತು ನಿನಗಾಯಿತು.
ಅದು ಹೇಗೆಂತೆಂದೊಡೆ—
ಪ್ರಾಣಲಿಂಗದ ಭಕ್ತಿಯ ಮರೆದು ಸತ್ತವರೆಲ್ಲ ಮಾಣದೆ ಪರಿಭವಕ್ಕೆ
ಭಾಜನವಾದರೆಂತಾತ ನಮ್ಮ ಅಂಬಿಗರ ಚೌಡಯ್ಯನು.

-೫-

ಒಬ್ಬ ತಂದೆಯ ಬಸುರಿನಲ್ಲಿ ಹಲವು ಗಂಡು ಮಕ್ಕಳು ಹುಟ್ಟಿದರಯ್ಯ!
ಅವರೊಳಗೊಬ್ಬ ತಂಗೆ, ಸೆರಗಂ ಕಟ್ಟಿ, ಮದುವೆಯ ಮಾಡಿದ ಬಳಿಕ.

ಆತರಿಗೆ ತನ್ನಂಗ ಸುಖವನೊಪ್ಪಿಸಬೇಕೆಲ್ಲದೆ, ಉಳಿದಿರ್ದವರೆಲ್ಲ ತನ್ನ ಮಾವನ ಮಕ್ಕಳೆಂದು,
ಅವರಿಗೆ ಸೆರಗು ಹಾಸುವನಳನು ಒಪ್ಪುವರೇ?
ಲೋಕದೊಳು ಪರಮಾತ್ಮನೆಂಬ ಶಿವನಿಗೆ, ಆಶ್ರಯವಾಗಿ ಹುಟ್ಟಿತು ಲಿಂಗ
ಆ ತಂಗೆ ವಾಹನವಾಗಿ ಹುಟ್ಟಿದಾತ ವೃಷಭ,
ಆ ತಂಗೆ ಯೋಗವಾಗಿ ಹುಟ್ಟಿದಾತ ವಿನಾಯಕ.
ಆ ತಂಗೆ ಯುದ್ಧಕೆ ಸರಿಯಾಗಿ ಹುಟ್ಟಿದಾತ ವೀರಭದ್ರ
ಇಂತಿವರೆಲ್ಲ ಶಿವನ ಮಕ್ಕಳಾದರೆ ನಾನೊಂಡು ಪ್ರಾಣವೆಂಬ ಕಂಕಣ ಕಟ್ಟಿ,
ಕರ ಸ್ಥಲಕ್ಕೆ ಬಂದ ಬಳಿಕ, ಅವನ್ನು ನಂಬಲರಿಯದೆ,
ಮತ್ತನ್ಯ ದೈವಕ್ಕೆರಗಿದರೆ ನಾಯ ನರಕವೆಂಬಾತ ನಮ್ಮ ಅಂಬಿಗರ ಚೌಡಯ್ಯನು

— ೬ —

ವೀರಗೆ ರಣಾಗ್ರ ಕವನ ಘೋರೆಂದು ತಟ್ಟಿವಲ್ಲಿ,
ದೂರಲಿಂದೆಸೆವ ಒಂದಂಬಿನಲ್ಲಿ, ಸೇರಿ ಬಂದಲ್ಲಿ,
ಹೊಯ್ವ ಬಿಲ್ಲಿನಲ್ಲಿ ಅವು ಮೀರಿ ಬಂದಲ್ಲಿ ಇರಿವ ಕಠಾರಿಯಲ್ಲಿ
ಅದು ತಪ್ಪಿದಕ್ಕೆ ತೆಕ್ಕೆಯಲ್ಲಿ ಹಿಡಿವ ಯುದ್ಧದಲ್ಲಿ,
ಬಿದ್ದಲ್ಲಿ ಕಡಿವ ಬಾಯಲ್ಲಿ, ಇಂತಿವು ತನ್ನ ಪ್ರಾಣಕ್ಕೆ ಬಂದಲ್ಲಿ,
ಅವ ತನ್ನ ಧೈರ್ಯ ಮರೆಯಲಿಲ್ಲ, ಹೀಗಿರಲಿಲ್ಲವೇ ಭಕ್ತನ ಗುಣ?
ಹೊನ್ನು—ಹೆಣ್ಣು— ಮಣ್ಣುಳ್ಳವ ಕಾಲಕ್ಕೆ ಪನ್ನಗ ಧರನ ಶರಣರಿಗೆ,
ಅನ್ನೋದಕ ವಸ್ತ್ರಗಳ ಉಪಚಾರವ ಮಾಡುವದು.
ಅದು ತಪ್ಪಿದ್ದಕ್ಕೆ ನೀಡಿ ಮಾಡುವ ಭಕ್ತರ ಮನಿಯ ತೋರಗೊಂಡು ಹೋಗಿ ತೋರುವದು.
ಅದಾಗದಿರ್ದೊಡೆ, ಹರ ಶರಣರ ಕಮಂಡಲವ ಕೊಂಡು ಹೋಗಿ
ಮಡುವಿನ ಅಗ್ಗಣಿಯ ತಂದು ಪಾದಾರ್ಚನೆಯ ಮಾಡುವದು.
ಅದಾಗದಿರ್ದೊಡೆ, ಹರ ಶರಣರಿಗೆ ಎದ್ದುರೆದ್ದು ಹೋಗಿ ನಮಸ್ಕರಿಸುವದು
ಇಷ್ಟರೊಳಗೊಂದು ಗುಣವಿಲ್ಲದಿರ್ದೊಡೆ ಅವ ಭಕ್ತನಲ್ಲ,
ಅವ ಹೊಲಿಯ! ಎಂದಾತ ನಮ್ಮ ಅಂಬಿಗರ ಚೌಡಯ್ಯನು.

—೭—

ತುತ್ತಿ ನಾಶೆಗೆ ಲಿಂಗವಕೊಟ್ಟು ಹೋಗುವ ವ್ಯರ್ಥ ಮೂಳ ನಿನಗೆ ಗುರು
ಪಾದ ನಲ್ಲಪ್ಪೆ,
ಸತ್ಯ ಸದಾಚಾರವ ಬಲ್ಲದೆ ತತ್ವಜ್ಞಾನವ ಬೋಧಿಸಿ
ಲಿಂಗಕ್ಕೂ ನಿನಗೂ ಸಂಬಂಧವ ಮಾಡದಿಹರ್ನೆ ?
ಕತ್ತೆ ಗುರುವಿನ ಪಾದ ಹಿಡಿದೆಯಾಗಿ, ಸ್ವತಃ ಲಿಂಗವೇ ನಿನಗೆ ಕಿರಿದಾಯಿತು.
ಕ್ಷೇತ್ರ ಲಿಂಗವೇ ನಿನಗೆ ಹಿರಿದಾಯಿತು.
ಕಂಕಣ ಪತಿ ಲಿಂಗವ ಕಿರಿದುಮಾಡಿ, ಕೊಂಕಣ ಪತಿ ಲಿಂಗವ ಹಿರಿದು
ಮಾಡುವಿ
ಮುಂಕಣ್ಣ ಕೊಡುವ ನಿನ್ನ ಲಿಂಗವನು, ನಮ್ಮ ಕೈಯಲ್ಲಿ ಕೊಡಲಾರದಿದ್ದೊಡೆ
ಈ ಹರಗೋಲು ಹೊರಲಾರನೇ,
ಭೋರಿಕನೇ ಮುಳುಗುವದೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೮—

ನಮಗೊಬ್ಬರೆಂಜಲು ಸೇರದೆಂದು ಆತನು ತನ್ನ ಸುಚಿತ್ತದಿಂದ,
ಬದುಕುತಿಹೆನೆಂಬ ಬರಿಯ ಮಾತಿನ ಭಂಜಕರು ನೀವು ಕೇಳಿರೋ!
ನೀವು ತಂದು ಕುಡಿವ ನೀರು ಜಲಚರದೆಂಜಲು.
ಮೃಗ ಪಕ್ಷಿಗಳೆಂಜಲು ಬಳಸವಾದಲ್ಲಿ ಕೈಕಾಲಂ ತೊಳೆದು ಬಾಯಿ ಮುಕ್ಕು
ಳಿಸುವಲ್ಲಿ,
ನರ ಮನುಷ್ಯರೆಂಜಲು ಇಂತೀ ಹಲವೆಂಜಲು, ಬೆರಸಿದ
ಸಕಲ ಪದಾರ್ಥವನು ಆ ಜಲದಿಂದ ಪಾಕವನು ಮಾಡಿ
ನಲಿ ನಲಿದುಂಡು ಕೊಡುವಲ್ಲಿ ಆ ಎಂಜಲು, ಹಿಂಗಿದ ಠಾವು ತೋರಿರಣ್ಣಾ!
ಇದ ಬಲ್ಲಿದ ಭಕ್ತರು, ಸರ್ವ ಪದಾರ್ಥವನು ಶಿವಮಂತ್ರ ಹಸ್ತ ಸ್ಪರ್ಶ,
ವಿಭೂತಿಯಿಂದ ಶುದ್ಧ ಮಾಡಿಕೊಟ್ಟ ಕೊಂಬಲ್ಲಿ ಗುರು ಪ್ರಸಾದವಾಯಿತು.
ಇದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನು ಕೊಟ್ಟಕೊಂಬ ಭಕ್ತನಿಗೀಗಲೆ
ಸ್ವವರುಜಲ ಹೊಲಿಯ ನೀಗಿದ, ಇವನರಿಯದಿರ್ದೊಡೆ ಸರ್ವರೆಂಜಲ
ಹೊಲಿಯೊಳಗೆ ಮುಳುಗಿಹೋದರೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೯—

ಮ ಕ್ಕ ಸತ್ತು, ಮಾರ ಮಕ್ಕಳು ಸತ್ತು,
ದೇಶಕ್ಕೆ ರಾಜ್ಯಕ್ಕೆ ನಷ್ಟವಾಗಿ ಕಷ್ಟ ದುಃಖವ ನೆಲೆಗೊಂಡಿತ್ತೆಂದು,
ತಮ್ಮಿಷ್ಟಲಿಂಗ ಪೂಜೆಯ ನಗಲಿಸಿ, ಬಟ್ಟಿಯ ಮಾಡಬಹುದೇನಯ್ಯ?
ಪೃಥವಾಗಿ ಜಂಗಮ ಬಂದು ಹಸಿದೆನೆಂದು, ತನ್ನ ವ್ರತ ನೇಮಕ್ಕೆ ಬೇಡಿದಲೆ
ಹೋಗುವಡಿಯರೇ, ನಮ್ಮ ದುಃಖದಲ್ಲಿ ನಾವು ಬೇಯುವ ಹಾಗ,
ಮಾಡಬಹುದೇನಯ್ಯ, ಎಂಬರು. ಸಕಲ ದುಃಖವೆಲ್ಲಿ ಶಿವನಿಕ್ಕಿದೊಡೆ ಬಂದ ವಲ್ಲದೆ,
ಅವು ತಮ್ಮಿಂದ ತಾವೇ ಬಂದಿಲ್ಲ. ಈ ದುಃಖವನೆ ಮುಂದುಗೊಂಡು,
ಮುಕ್ಕಣ್ಣನ ಶಿವನ ಪೂಜೆಯ ಮಾಡದಿರ್ದೊಡೆ ಅವೇ ದುಃಖಕ್ಕೆ ಮುಂದಕ್ಕೆ,
ಆಯುಷ್ಯವಹುದೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೧೦—

ನಿಂದಿರಿಸ ಬಹುದಯ್ಯ, ಒಂದೇ ಮಂತ್ರದಲ್ಲಿ ಹಾರುವ ಪಕ್ಷಿಯ.
ನಿಂದಿರಿಸ ಬಹುದಯ್ಯ, ಒಂದೇ ಮಂತ್ರದಲ್ಲಿ ಕಚ್ಚುವ ಕಾಳೋರಗನ.
ನಿಂದಿರಿಸ ಬಹುದಯ್ಯ, ಒಂದೇ ಮಂತ್ರದಲ್ಲಿ ಹೆಬ್ಬುಲಿಯನಾ.
ನಿಂದಿರಿಸ ಬಹುದಯ್ಯ, ಒಂದೇ ಮಂತ್ರದಿಂದ ಹೊಯ್ವ ಹೆಮ್ಮಾರಿಯ.
ನಿಂದಿರಿಸ ಬಹುದಯ್ಯ, ಒಂದೇ ಮಂತ್ರದಲ್ಲಿ ಬರುವ ಉರಿ ಬಾಣವನು.
ಇಂತಿವೆಲ್ಲವನು ಒಂದೇ ಮಂತ್ರದಲ್ಲಿ ಭೇದಿಸಬಹುದು.
ನಿಂದಿರಿಸಲನವಲ್ಲಯ್ಯಾ, ಒಂದೆರಡು ಲಕ್ಷ ವಚನವನು.
ಮಂತ್ರಂಗಳಂ ಕಲಿತಿರ್ದ ಲೋಕದ ಮಂದಮತಿ ಮರ್ಕಡರಿಗೆ,
ಸತ್ಯ ಸದಾಚಾರವ ಹೇಳಿ, ಭಕ್ತಿಯ ಮಾರ್ಗದೊಳು ಮಾಡೆಂದರು ಮಾಡರು
ಬೇಡವೆಂದ ಠಾವಿಗೆ ಓಡಿಹೋಗುವ ಗಾಡಿಮೂಳ ಹೊಲೆಯಂಗೆ ಸರ್ವ ವಚನಂಗಳಲ್ಲಿ,
ಅಡಿಗಡಿಗೆ ತೋರಿ ಹೇಳಲಿಕ್ಕೆ ನಮಗೇನು ಕೆಲಸ?
ತಾವು ಮಾಡಿದ ಕರ್ಮಂಗಳೊಳಗೆ ಮುಳುಗಿ ಈಸ್ಯಾಡುವಾಗ ನಮ್ಮನು ಕರಿಯಲರಿಯರು.
ಇದನೀ ಸುಮ್ಮನೆ ನೋಡುತ್ತಿರು ಎಂದಾತ ನಮ್ಮ ಅಂಬಿಗರ ಚೌಡಯ್ಯನು.

—೧೧—

ಅಂದ ಚಂದವ ಬಿಟ್ಟು, ಮಂಡಿ ಬೋಳಾದ ಮತ್ತೆ ಲಿಂಗಕ್ಕೆ,
ಚಂದ ಅಲಂಕಾರವುಂಟೇ, ತನ್ನಂಗ ಸಂಗವನರಿಯದೆ?
ಲಿಂಗ ಸಂಗಿಯಾದೆನೆಂಬ ಭಂಡರ
ನಾನೇ ನೆಂಬೆ? ಎಂದಾತ ನಮ್ಮ ಅಂಬಿಗರ ಚೌಡಯ್ಯನು.

—೧೨-

ವ್ರತವೆಂಬುದೇ ಪ್ರಾಣ ಘಟವೆಂಬುದೇ ಕಟ್ಟು.
ಪ್ರಾಣವಿಲ್ಲದೇ ಘಟ ಜ್ಞಾನವಿಲ್ಲದೇ, ಕ್ರಿಯಕ್ಕಾ ಈ ಉಭಯಕ್ಕಾ,
ನಾಸ್ತಿರೆಂಬುವದರಿಯ ಬೇಕೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೧೩-

ಗುರುವಿನೊಳಡಗಿರ್ದ ಭಕ್ತ ಪರವ ಕಂಡುದಿಲ್ಲಾ?
ಲಿಂಗದೊಳಡಗಿರ್ದ ಭಕ್ತ ಜಂಗಮುವ ಕಂಡುದಿಲ್ಲಾ?
ಇವರಿಬ್ಬರ ಭಕ್ತಿ ಎಂತಾಯ ತೆಂದೊಡೆ, ಹುರಿಗೂಡಿದ ಹಗ್ಗದಂತಾಯಿತು.
ನೋಡು ಅರುಹುವ ಆಚಾರವಿಡಿದು ಆ ಚರಿಸುವ ಸದ್ಭಕ್ತನು,
ಗುರು-ಲಿಂಗ-ಜಂಗಮುವನು ನೆರೆಕಂಡು ಸಮ್ಮತವಾಗಿ.
ಇಹ–ಪರವೆಂಬ ಉಭಯ ಸಂಕಲ್ಪವನರಿತುದಿಲ್ಲ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

-೧೪-

ಕರದಲ್ಲಿ ಲಿಂಗವ ಪಿಡಿದುಕೊಂಡು ಕಣ್ಣುಮುಚ್ಚಿ, ಸರಜಪಮಾಲೆಯ,
ಬೆರಳಿಂದ ಎಳೆವೆಳೆದು ಎಣಿಸುತ್ತ ಗುರುಮೂರ್ತಿಯ ಧ್ಯಾನಿಸುತ್ತ
ಕಂಡೆನೆಂಬಕ್ತ, ಇರುವರೆ ಮೂಳರಿರ್ರಾ?
ನಿಮಗೆಲ್ಲಿಯದೋ ಗುರುಧ್ಯಾನ?
ಪರ ಪರ ವಸ್ತುವಿಂಗೆ, ಸರಿಯೆನಿಸಿಕೊಂಬಾ ಗುರುಸ್ವಾಮಿ,
ನಿಮ್ಮ ನೆರೆ, ಹೊರೆ, ಸರಿ, ಸಮೀಪ ಗ್ರಾಮದಲ್ಲಿರಬೇಕೆ,

ಅವರನು ಲೆಕ್ಕಿಸದೆ, ಉದಾಸೀನವ ಮಾಡಿಕಂಡು, ಎಂಬ ಉಡುವ ಸಿರಿ ಸಂಪತ್ತಿನೊಳು.
ಅವರನು ಸತ್ಕರಿಸದೆ ಕರದಲ್ಲಿ ನೋಡಿ ಕಂಡೆನೆಂದು ಸಿರಿವಂಬಿಗಿವ,
ತಲುವಿರಿಗಳು ಅರಿದೆನೆಂಬ ಅರಿವಿಂಗೆ ಸಿರದೂಗಿ ಜೆರಗಾಗಿ.
ನಗುತಿರ್ದ ನಮ್ಮ ಅಂಬಿಗರ ಚೌಡಯ್ಯನು.

-೧೫-

ಆರಕ್ಕಾರು ಬಿತ್ತಿದ, ಗಿಡದ ಹೂವನೇ ಕೊಯ್ದು,
ಊರಲ್ಲಿ ಕಟೆದ ನೀರನೇ ತಂದು, ನಾಡೆಲ್ಲ ನೋಡಲೆಂದು,
ಪೂಜಿಸುವ ಪುಣ್ಯವು ಆ ಹೂವಿಗೋ, ಆ ನೀರಿಗೋ?
ನಾಡೆಲ್ಲ ನೋಡಲೆಂದು ಪೂಜಿಸಿದಾತಗೋ?
ಇದ ನಾನರಿಯೆ?
ನೀವೇ ಬಲ್ಲಡೆ ಹೇಳೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೧೬-

ಎಲ್ಲವಂ ಕಳೆದುಳಿದ ಹೂವನೆ ತಂದು, ಗೆಲಿಸೋಲಕ್ಕೊಳಗಾಗದ ನೀರನೇ ತಂದು,
ಕರಣಂಗಳೆಲ್ಲವಂ ಕಂಗಳ ತುಂಬಿ ನಿನ್ನೋಡಲು,
ತನ್ನ ಘನದ ನಿಜವ, ಪರವ, ಲಿಂಗವ,
ಪೂಜಿಸಬೇಕೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೧೭-

ಈಶ್ವರನನ್ನು ಕಾಂಬುವದೊಂದು ಆಸುರೆವುಳ್ಳದೊಡೆ,
ಪರದೇಶಕ್ಕೆ ಹೋಗಿ ಬಳಲದಿರು?
ನೀನು ನಿನ್ನೊಳಗೆ ತಿಳಿದುನೋಡು??
ಜಗವು ನಿನ್ನೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೧೮-

ಗಿಳಿಯಿಲ್ಲದ ಪಂಜರ ಹಲವು ಮಾತಾಡಬಲ್ಲುದೇ?
ದೇವರಿಲ್ಲದ ದೇಗುಲಕ್ಕೆ ಮಂತ್ರಾಭಿಷೇಕವುಂಟೇ?
ಅವು ನಷ್ಟವಾಗಿ ಕುರುವಿನುಹನಂತೆ,
ನಾನರಿಯನೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೧೯—

ಮೋಹೆ ಗೂಡದಲ್ಲಿ ಇರುಬಲ್ಲುದೇ?
ಮುದ್ರಿಯು ವಸು ಪ್ರಾಣಲಿಂಗಿಯಾಗಬಲ್ಲುವೇ?
ಡಾಗಿನ ಪಶುಗಳೆಲ್ಲ ಭೇದವ ನರಿಯಬಲ್ಲವೇ?
ಎಂದಾತ ನಮ್ಮ ಅಂಬಿಗರ ಚೌಡಯ್ಯನು.

—೨೦—

ದೊಡ್ಡ ದೊಡ್ಡ ಚಿಂದಿಯ ಶಿಪ್ಪಿಗಳ ಕಂಡು,
ಅಡ್ಡಗಟ್ಟಿ ಹೋಗಿ ಶರಣಾರ್ಥಿಯೆಂಬರು.
ಎಡ್ಡಗಳ್ಳ ತನಕ್ಕೆ, ದುಡ್ಡುಗಳ ಬೇಡುತ್ತ, ತಮ್ಮ ಮಠಕ್ಕೆ ಬರ್‍ರಿ ಹಿರಿಯರೇ ಎಂಬರು.
ಹೋಗಿ ಶರಣಾರ್ಥಿ ಭಕ್ತನೆಂದೊಡೆ—
ಕೇಳದ ಹಾಗೆ ಅಡ್ಡ ತೋರಿಯ ನಿಕ್ಕಿಕೊಂಡು ಸುಮ್ಮನೆ ಹೋಗುವ,
ಹೆಡ್ಡ ಮೂಳರಿಂಗೆ ದುಡ್ಡೇ ಪ್ರಾಣವಾಯಿತು.
ದುಡ್ಡಿಸ್ತರ ಕುರುಹ ನರಿಯದೆ ಮೊಳ ವಾದದ ಮೇಲೆ—
ಹೊಡಕೊಂಡು ನಗುತಿರ್ದಾತ ನಮ್ಮ ಅಂಬಿಗರ ಚೌಡಯ್ಯನು.

—೨೧—

ಹಾಡಿ ಮಾಡುವ ಹರಕೆಯು ಕೇಳು?
ಕೂಡಿ ಮಾಡುವ ಕುದುರೆಯು ಕೇಳು.
ಹಾಡಿಮಾಡಿ, ಕೂಡಿಮಾಡಿ, ಬದುಕಿಗೆ ಕೇಡು ತಂದು ಕೊಳ್ಳಲೇತಕೋ?
ತನ್ನ ಬಿಡಲಿಕ್ಕೆ ಬಂದ ಲಿಂಗ-ಜಂಗಮರ ಇರವನರಿತು, ಸೀಡ ಕಲಿತರೆ,
ರೂಢಿಯೊಳಗೆ ಆತನೇ ಜಾಣನೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೨೨—

ಭಕ್ತರ ನಂಬಿದರೆ ಕೊಪ್ಪದ ರಾಮಯ್ಯನಂತೆ ನಂಬಬೇಕಯ್ಯಾ!
ಭಕ್ತರ ನಂಬಿದರೆ ಕೆಂಭಾವೀ ಭೋಗಂಣನಂತೆ ನಂಬಬೇಕಯ್ಯಾ!

ಭಕ್ತರ ನಂಬಿವರೆ ಸೇದಿರಾಜಯ್ಯನಂತೆ ನಂಬಬೇಕಯ್ಯಾ!
ಭಕ್ತರ ನಂಬಿದರೆ ಏಣಾಧಿನಾಥನಂತೆ ನಂಬಬೇಕಯ್ಯಾ!
ಇಂತಪ್ಪ ನಂಬಿಗೆಗೆ ತಾನು ಸರಿಯೆಂದು ನಾನು ಪಾದಿಬಾಬಿಸಲೆ?
ಎಂಬ ಬೀದಿಯ ರೋರನಂತೆ, ತನ್ನ ಎದೆಯೊಳಗೊಂದು ಮಾತು,
ಬೀದಿಯೊಳಗೊಂದು ಮಾತು, ತುದಿ ನಾಲಗೆಯಲ್ಲಿ
ಭಕ್ತರನು ನಂಬಿದೆನೆಂದು ಗಳಹುವ ಗೊಡ್ಡ ಹೊಲಿಯನ ಕಂಡಡೆ,
ಎದೆ—ಎದೆಯನೊದ್ದು ತುಳಿಯೆಂದಾತ ನಮ್ಮ ಅಂಬಿಗರ ಚೌಡಯ್ಯನು.

--೨೩--

ತನ್ನನೆ ಮರೆದು ದೇವರ ಕಂಡೆನೆಂಬ ಕಾರಣ,
ಹರಿ-ಸುರ ಬ್ರಹ್ಮಾದಿಗಳೆಲ್ಲರು ತಲೆಕೆಳಗಾಗಿ ಹೋದರು.
ಆ ದೇವರ ಮರೆದು, ತನ್ನನ ನರಿದುದುಂಟಾದರೆ,
ತಾನೆ ದಿಟವೆಂದ ಅಂಬಿಗರ ಚೌಡಯ್ಯನು.

-೨೪-

ತನ್ನನ ಹುಸಿಮಾಡಿ, ಇನ್ನೊಂದು ದಿಟ ಮಾಡುವ ಅಣ್ಣಾರಿಗೆ
ನಂಬುಗೆ ಇನ್ನಾವುದಯ್ಯಾ?
ತನ್ನೊಳಗಿರ್ದ ಘನವ ತಾ ತಿಳಿಯಲರಿಯದೆ,
ಪರಬ್ರಹ್ಮಕ್ಕೆ ತಲೆಯಿಕ್ಕಿ ತೆಗೆದನೆಂಬ ಅಣ್ಣ-
ಗಾವಿಲನೆಂದ ಅಂಬಿಗರ ಚೌಡಯ್ಯನು.

-೨೫-

ಗಾಳಿ ಹಡಗದಲ್ಲಿ ತೂರಿ ಕೊಳ್ಳಿರೇ! ಗಾಳಿ ನಿನ್ನಾಧೀನವಲ್ಲ ಕಂಡಯ್ಯ!
ನಾಳೆ ತೂರಿಹೆನೆಂದಡೆ ಇಲ್ಲನೊಡಯ್ಯ!
ಶಿವಶರಣೆಂಬುದೊಂದು ಗಾಳಿ ಹಡಗದಲ್ಲಿ-
ಬೇಗ ತೂರೆಂದ ನಮ್ಮ ಅಂಬಿಗರ ಚೌಡಯ್ಯನು.

-೨೬-

ಎಸವಿನ ಗುರು ಹೋಗಿ ಶಿಶುವಧೆಯ ಮಾಡಿದ.
ಶಿಶುಹೋಗಿ ಮರಳಿ ಗುರುವ ಕೊಂದಡೆಯು.
ಹೆಸರುಗೊಂಬ ಅಣ್ಣಗಳು ನೀವು ಕೇಳಿರೋ!
ಇವರಿಬ್ಬರು ಸತ್ತ ಠಾವನ್ನೊಬ್ಬರು ಅರಿಯರು,
ಸಿರ್ಸಯಲಿಂದಾತ ನಮ್ಮ ಅಂಬಿಗರ ಚೌಡಯ್ಯನು.

-೨೭-

ಅಸುರ ಮಾಲೆಗಳಲ್ಲಿ ತ್ರಿಶೂಲ ಡಮರುಗವಿಲ್ಲ.
ಬ್ರಹ್ಮ ಕಪಾಲವಿಲ್ಲ. ಭಸ್ಮ ಭೂಷಣನಲ್ಲ.
ವೃಷಭ ವಾಹನನಿಲ್ಲ. ಋಷಿಯ ಮಗಳೊಡನಿರ್ದಾತನಲ್ಲ.
ಎಸಗುವ ಸಂಸಾರದ ಕುರುಹಿಲ್ಲದಾತರಿಗೆ—
ಹೆಸರಾವುದೆಂದ ನಮ್ಮ ಅಂಬಿಗರ ಚೌಡಯ್ಯನು.

-೨೮—

ಮದ್ದು ತಿನ್ನ ಬೇಕಾದರೆ ವೈದ್ಯನಿದ್ದಲ್ಲಿಗೆ ಹೋಗಿ ಹಣ ಹೊನ್ನನೇ ಕೊಟ್ಟು,
ದೈನ್ಯಂ ಬಟ್ಟು ತಂದು ತಿಂಬರು ನೋಡಯ್ಯಾ.
ಇದು ಶಿವ ಸಿದ್ಧ ಪ್ರಸಾದಕ್ಕೆ ಎಂದು ಬಿನ್ನಹ ಮಾಡದ,
ತಾವಿರ್ದೆಡೆಗೆ ಅಹಂಕಾರದಲ್ಲಿ ತರಿಸಿಕೊಂಬ ಗೊಡ್ಡ ಮೂಳನ ಕಂಡಡೆ,
ಒದ್ದೊದ್ದು ಕೊಲ್ಲೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೨೯—

ಪ್ರಸಾದ ನಂಬಿದರೆ ಬಿಲ್ಲ ರಾಮನಂತೆ ನಂಬಬೇಕಯ್ಯಾ!
ಪ್ರಸಾದ ನಂಬಿದರೆ ಬಬ್ಬಿ ಬಾಚರಸನಂತೆ ನಂಬಬೇಕಯ್ಯಾ!
ಪ್ರಸಾದ ನಂಬಿದರೆ ವಾಮನ ಮುನೀಶ್ವರ ಶಿಷ್ಯನಂತೆ ನಂಬಬೇಕಯ್ಯಾ!
ಇಂತು ನಂಬಿಕೊಂಡರೆ ಮಹಾಸಾಧನ.
ನಂಬದೇ ಸಪ್ಪೆಯದಾ ಕ್ಷಣಕ್ಕೆ ಹೋಗಿ ತಾ ಬಂದು, ಮನವಸಿಕ್ಕಿ ಕೊಂಡರೆ,
ಅದು ತನಗೆ ಸಿಂಗೀ ಕಾಲಕೂಟ ವಿಷವೆಂದಾತ ನಮ್ಮ ಅಂಬಿಗರ
ಚೌಡಯ್ಯನು.

—೩೦—

ಸಂಬೆಣ್ಣ ಮಾಡುವ ಭಕ್ತಿ ನಾಡೆಲ್ಲ ಮಾಡಬಹುದಯ್ಯಾ!
ಕುಂಬಾರ ಗುಂಡಯ್ಯ ಮಾಡುವ ಭಕ್ತಿ ಊರೆಲ್ಲ ಮಾಡಬಹುದಯ್ಯಾ!
ಬಸವಣ್ಣ ಮಾಡುವ ಭಕ್ತಿ ಶಿಶುವೆಲ್ಲಿ ಮಾಡಬಹುದಯ್ಯಾ!
ಸಿವೇನು ಮೊಡ್ಡಿತ್ತು?
ಸರ್ವರಿಗೆ ಪಾಸವಾಗದ ಭಕ್ತಿ, ಈಗಲಿವರ ಮನ ಜ್ಞಾನವದಂತೆ ಇರಲಿ.
ಇದಕ್ಕ ಶರಣಾರ್ಥಿ ಈ ವಸುಧಿಯೊಳಗೆ ಶುದ್ಧ ಭಕ್ತಿಯ ಅರಿತು,
ನುಡಿದುದು ಸಿದ್ಧಿಯಾಗದೆ, ನಡೆದುದು ಬಟ್ಟೆಯಾಗದೆ,
ಹಿಡಿದುದು ನಷ್ಟವಾಗದೆ, ಕೆಡಿ ಹೊಡಿಯುವರೆಲ್ಲ ಅಟ್ಟೆ ಅಲವುತ್ತ ಎಡೆ ವಿಡದೆ,
ದೇಹಕ್ಕೆ ರುಜ ರೋಗಂಗಳು ಬಂದು, ಅಟ್ಟೆ ಮುಟ್ಟಿದವಾಗಿ ದೃಢವಾಗಿದ್ದು,
ಶರಣರ ಮನ ನಿಶ್ಚಯಿಸಿ ದೃಢಶೀಲಂಗಳಂ ಬಿಡದೆ ನಡೆವಾತ,
ಹೊಸ್ತ ಭಕ್ತನೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೩೧—

ಬೇಗ ಜೇಗತಿ ಪದದ ಸ್ನಾನ ಮಾಡಿಕೊಂಡು,
ನೀಗಿರೋ ನಿಮ್ಮ ಭವಬಂಧನದ ಸಾಗರವನು.
ಪ್ರಾಣತ್ಯಾಗವು ಈಗಲೋ ಆಗಲೋ ಯಾವಾಗಲೋ ಎಂದರಿಯ ಬಾರದು.
ರೋಗ ರುಜೆಗಳಿಗೆ ಆಗರವು ನಿಮ್ಮ ಒಡಲು.
ತನು ಮನ ಪ್ರಾಣವ ನೆಚ್ಚದಿರು. ನಾಗಭೂಷಣನ ಪಾದಪೂಜೆಯ ಮಾಡಿ,
ಶಿವಯೋಗಪಲ್ಲಿ ಲಿಂಗವ ನೊಡಗೂಡಿ ಸಾಗಿಹೋಗುವರನ್ನು,
ಭವಗೇಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

-೩೨-

ಗಂಧವ ವಾಯು ಕೊಂಬಾಗ, ಗಂಧ ಮರಕ್ಕೆ ಸುಗಂಧ ಹುಟ್ಟುವಾಗ,
ಹಾವು ತಂದು ಬಂಧಿಸುವರ್ಯಾರು?

ಹಾವು ತನ್ನ ಅಂಗತತ್ವವಾವಂತೆ, ನಿಂದ ನಿಜವ ತಾನರಿತು,
ಅಕ್ಕಿ ಬೇರಿಂದು ಸಂದೇಹವು ಸಂದಿಸಲಿಲ್ಲವೆಂದಾತ
ನಮ್ಮ ಅಂಬಿಗರ ಚೌಡಯ್ಯನು.

-೩೩-

ಕೈ ಮುಟ್ಟುವಲ್ಲಿ, ಕಿವಿ ಕೇಳುವಲ್ಲಿ, ವಾಯು ಕೊಂಬಲ್ಲಿ,
ಮೂಗು ಮೂಸಿಸುವಲ್ಲಿ, ಕಣ್ಣು ನೋಡುವಲ್ಲಿ, ಬಾಯಿ ಕೊಂಬಲ್ಲಿ,
ಇಂತೀ ಐದರ ಮಾಟವನು ವಿಚಾರಿಸದೆ, ಸಂಚಿತ ಪ್ರಾರಬ್ಧ ಆಗಾಮಿಯೆಂಬ
ಪಿಂಚು ಮುಂಚಿಗೆ ಸಿಕ್ಕದೆ, ಕಡುಬೆಳಗಿನ ಮಿಂಚು ಸುಚರದಂತೆ
ಇರಬೇಕೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೩೪-

ಒಡಿಯುವೆ ತೆಂಗಾಯಿ ಮದ್ದವರುಂಟೇ?
ಕಾಯುವ ಗುಣಕಿಳಿವಂತೆ, ಅಂಗವ ನರಿದವರುಂಟೇ?
ಜೋಡು ಹರಿದಲ್ಲದೇ ದೇಹ ಹರಿಯದು, ಕೈ ಇದು ಅನ್ಯದೈವ ತಿಳಿದಲ್ಲಿದೆ
ಗುಹೇಶ್ವರ ಲಿಂಗವನು ಹರಿಯದೆಂದಾತ ನಮ್ಮ ಅಂಬಿಗರ ಚೌಡಯ್ಯನು.

—೩೫--

ತಟಾಕ ಒಡೆದರೆ ಕಟ್ಟುವವಲ್ಲದೆ, ಅಂಬುಧಿ ತುಂಬಿ ಮೇರೆ
ತಪ್ಪಿದರೆ ಕಟ್ಟಂಗೆ ನಿಂತದ್ದುಂಟೇ?
ಅರಿಯದವನಿಗೆ ಬೇರೊಂದು ಹೇಳೇನೆಂದರೆ,
ಅರಿಕೆಯ ಹೇಳಿದರೆ ಅರಿವನಲ್ಲದೆ,
ಅರಿವು ಮರೆವಂಗೆ ಬೇರೊಂದು ಹೇಳೇನೆಂದರೆ,
ಕಡೆಮೊದಲಿಲ್ಲವೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೩೬-

ತುಪ್ಪದಲ್ಲಿ ಬೆಂದರೇನು, ಸಪ್ಪೆಯಾಗಿ ತೋರಿತು.
ಅರಿವು ಉಳ್ಳವನೆಂದು ಕುರುಹಿನ ಬೆಂಬಳಿಯಲ್ಲಿ ಅಡಗಿದರೆ,
ಅರಹು-ಕುರುಹು ನಿಷ್ಫಲ; ಅರಸೂ ಕೇಡ ನುಡಿಯಬೇಡ
ಎಂದಾತ ನಮ್ಮ ಅಂಬಿಗರ ಚೌಡಯ್ಯನು.

ಬ್ಯಾಡಂಗೆ, ಜ್ಯಾಡಂಗೆ, ಡೊಹರಂಗೆ, ಹೊಲಿಯಂಗೆ,
ರೂಷಿಗೀಶ್ವರ ನೊಲಿದ ಪರಿಯ ನೋಡಾ!
ಲೋಕವ ಮಾನವರು ಮಾಡುವರು ನಮ್ಮಂಗೆ
ಮಾಡಲಿಕ್ಕೆ ಅವರೇನು ಸ್ವತಂತ್ರವೇ! ಇವರೊಡ್ಡಿದ ದಾರಿಯಲ್ಲಿ,
ಕಲ್ಲು-ಮುಳ್ಳು ಮಾಡುವವೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೩೮-

ಕಾಳಗಕ್ಕೆ ಹೋಗದಿರಯ್ಯಾ ಗುಂಡು ತಾಕ್ಯಾವು.
ಆರು ದರ್ಶನಕ್ಕೆ ನಿಮ್ಮನ್ನು ತೋರಿವರಯ್ಯಾ!
ನಾಲ್ಕುವೇದ-ಹದಿನೆಂಟು ಪುರಾಣವೆಂಬುವರ ಬೆನ್ನು ಹತ್ತಿದರು
ಬೇರೆ ತೀರ್ಥ ಯಾತ್ರೆಯೆಂಬುವದು ಆರಧ್ಯತನ ಬೇಡ.
ಪುಣ್ಯ ಪಾಪವೆಂಬೆರಡು ಭಂಡಾರವನು ಬೆನ್ನಿನಲ್ಲಿಕ್ಕಿಕೊಂಡು.
ಬಾರದಿರು ನೀನು; ನೀನಲ್ಲಿ ನೀನು ತಿಳಿದುನೋಡು,
ಜಗದೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೩೯-

ನೇಮಸ್ಥನೆಂಬ ಕರ್ಮಿ; ಶೀಲವಂತನೆಂಬ ಸಂದೇಹಿ:
ಭಾಷ್ಯವಂತನೆಂಬ ಬ್ರಹ್ಮೇತಿ ಕಾರರು;
ಇವರು ಮೂವರು ಕುಳಿತಲ್ಲಿ ಕೂಡರಲಾಗದು, ನಿಂತಲ್ಲಿ ನಿಲ್ಲಲಾಗದು
ಹೋದ ದಾರಿಯಲ್ಲಿ ಹೋಗಲಾಗದು
ಇವರು ಮೂವರಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ,
ಪಾದೋದಕ ಪ್ರಸಾದವಿಲ್ಲವೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೪೦-

ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ
ಹೊಟ್ಟೆಡಿಯಾಗಿ ಬೀಳುವ ಲೊಟ್ಟೆ ಮೂಳನ ಕಂಡರೆ.

ಮೆಟ್ಟಿದ್ದ ಎಡದ ಪಾದ ರಕ್ಷೆಯ ತಕ್ಕೊಂಡು
ಲಟ ಲಟನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

-೪೧-

ಗುರುವೆಂದೆನ್ನೆ, ಹಲವರ ಮಗ;
ಲಿಂಗವೆಂಬೆನ್ನೆ, ಕಲ್ಲು ಕುಟಿಗರ ಮಗ;
ಪ್ರಸಾದವೆಂದೆಂಬೆನ್ನೆ, ಒಕ್ಕಲಿಗರ ಮಗ;
ಪಾದತೀರ್ಥವೆಂದೆಂಬೆನ್ನೆ, ದೇವೇಂದ್ರನ ಮಗ;
ಈ ಪರಿ ಹಿಡಿಯಲಿಲ್ಲ, ಬಿಡಲಿಲ್ಲ, ತನ್ನೊಳಗೆ ತಾನು
ತಿಳಿದು ನೋಡೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೪೨-

ನಾರಿವಾಳದ ಕಾಯಿ ನಾಯಿ ಮುಂದೆ ಹಾಕಿದಲೆ ಅವರಂದವನೆತ್ತ ಬಲ್ಲುದೋ
ಜಂಗಮದೊಳಗೆ ಲಿಂಗವನರಿಯದವ,
ಭಂಗಿಯ ತಿಂದಂತೆ ತನ್ನ ಹೊಂದಿದಾತ್ಮನ ತಾನು ತಿಳಿಯದಿದ್ದರೆ,
ತೆಂಗತಿಂದ ನಾಯಿಯೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೪೩-

ಉಂಡರೆ ಭೂತನೆಂಬರು, ಉಣದಿದ್ದರೆ ಚಕೋರನೆಂಬರು.
ಭೋಗಿಸಿದರೆ ಕಾಮಿಯೆಂಬರು.
ಭೋಗಿಸದಿದ್ದರೆ ಮುನ್ನ ಮಾಡಿದ ಕರ್ಮವೆಂದರು.
ಊರೊಳಗಿದ್ದರೆ ಸಂಸಾರಿಯೆಂಬರು
ಅಡವಿಯೊಳಗಿದ್ದರೆ ಮೃಗ ಜಾತಿಯೆಂಬರು.
ನಿದ್ರೆಗೈದರೆ ಜಡದೇಹಿ ಎಂಬರು.
ಎದ್ದಿದರೆ ಚಕೋರನೆಂಬರು.
ಇಂತೀ ಜನಮೆಚ್ಚಿ ನಡೆದವರ ಎಡದ ಪಾದ ಕಿರುಗುಣಿಯಲ್ಲಿ
ಮನಿ ಮಾಡು ಎಂದಾತ ನಮ್ಮ ಅಂಬಿಗರ ಚೌಡಯ್ಯನು.

-೪೪-

ಕುಲಹೀನ ಶಿಷ್ಯರಿಗೆ, ಅನುಗ್ರಹ ಮಾಡಿ,
ತಿರುಗಿ ಅವನ ಮನೆಯಲ್ಲಿ ಉಣ್ಣಬಾರದೆಂದು,
ಅಕ್ಕಿ ಕಣಕವ ತಕ್ಕೊಂಡು ಹೋಗುವ ಗುರುವಿನ ಕಂಡರೆ,
ಕೆಡವಿ ಹಾಕಿ ಮೂಗನೇ ಕೊಯ್ದು—
ಇಟಂಗಿಯ ಕಲ್ಲಿಲೆ ತಿಕ್ಕಿ, ಮೇಲೆ ನಿಂಬಿಯ ಹುಳಿಯನೆ ಹಿಂಡಿ,
ಪಡುವ ಗುಳಿಗೆ ಹಿಡಿಯಂದಾತ ನಮ್ಮ ಅಂಬಿಗರ ಚೌಡಯ್ಯನು.

-೪೫-

ದೇಹಾರವ ಮಾಡುವ ಅಣ್ಣಗಳಿರಾ!
ಒಂದು ತುತ್ತು ಆಹಾರವ ನಿಕ್ಕಿರಯ್ಯಾ!
ದೇಹಾರಕ್ಕೆ ಆಹಾರವೇ ನಿಚ್ಚಣಿಕೆ!
ದೇಹಾರವ ಮಾಡುತ್ತ, ಆಹಾರವ ನಿಕ್ಕದಿರ್ದೊಡೆ,
ಆಹಾರವಿಲ್ಲೆಂದ ಅಂಬಿಗರ ಚೌಡಯ್ಯ.

-೪೬-

ಘಾಳಿ ಬಿಟ್ಟಲ್ಲಿ ತೂರಿ ಕೊಳ್ಳಿರಯ್ಯ!
ಘಾಳಿ ನಿಮ್ಮಾಧೀನವಲ್ಲವಯ್ಯಾ!
ನಾಳೆ ತೂರಿಹೆನೆಂದಡೆ ಯಿಲ್ಲಯ್ಯಾ!
ಶಿವಶರಣ ಎಂಬುದೊಂದು ಗಾಳಿ ಬಿಟ್ಟಲ್ಲಿ
ಬೇಗ ತೂರೆಂದ ಅಂಬಿಗರ ಚೌಡಯ್ಯ.

—೪೭—

ವೇದದಲ್ಲುಳಡೆ ಪ್ರಾಣ ವಧೆಯುಪ್ಪುದೇ?
ಶಾಸ್ತ್ರದಲ್ಲಿ ಉಳ್ಳಡೆ ಸಮವಾಗ ದಿರ್ಪುದೇ?
ಸರ್ವತ್ರದಲ್ಲಿ ಉಳ್ಳಡೆ ಹೋದವರು ಮರಳಿ ಬಪ್ಪರೇ?
ನಿರ್ಬುದ್ಧಿ ಮಾನವರನೇ ನೆಂಬೆನು?

ಮನಸ, ವಚನ, ಕಾಯ ಶುದ್ಧರಾಗಿರ್ಪತರ ಹೃದಯಲ್ಲಿ
ನಿಮ್ಮ ಕಂಡೆನೆಂದ, ಅಂಬಿಗರ ಚೌಡಯ್ಯ.

—೪೮—

ಕಂತೆ ತೊಟ್ಟವ ಗುರುವಲ್ಲ!
ಕಾವಿ ಹೊತ್ತವ ಜಂಗಮನಲ್ಲ!
ಶೀಲ ಕಟ್ಟಿದವ ಶಿವಭಕ್ತನಲ್ಲ!
ನೀರು ತೀರ್ಥವಲ್ಲ, ಕೂಳು ಪ್ರಸಾದವಲ್ಲ!
ಇವರ ಬಸ್ಥ ಹೌದೆಂಬುವನ ಬಾಯ ಮೇಲೆ
ಅರ್ಧ ಮಣವ ಪಾದ ರಕ್ಷೆಯ ತಕ್ಕೊಂಡು ನೂಸಿ ಕಡಿಮಿಯಿಲ್ಲದೆ,
ತಾಗಿ ತಾಗಿ ಟೊಂಕ ಟೊಂಕನೆ ಹೊಡೆಯೆಂದಾತ ನಮ್ಮ ಅಂಬಿಗರ
ಚೌಡಯ್ಯನು.

—೪೯—

ತಟ್ಟಿ ಗೋಣೀ ಸೊಪ್ಪು ಸಕಲಾತಿ ಅಲ್ಲವೇ,
ತೊತ್ತಿನ ಮಗ ಭಕ್ತ ನಲ್ಲವಯ್ಯಾ!
ಹಿರಿಯ ದೇವತಿಗೆ ಬಿಟ್ಟಕೋಣ ಘಾಳಿಯಲ್ಲವಯ್ಯಾ!
ಕಂಡ ತೊತ್ತಿಗೆ ಹುಟ್ಟಿದವ ಜಂಗಮನಲ್ಲವಯ್ಯಾ!
ಹಣತಿ ನೆಕ್ಕುವ ಮಠಪತಿ ಪಂಚಮಠಕ್ಕೆ ಸಲ್ಲ!
ಈ ಮೂವರಿಗೆ ಆದಿಯಲ್ಲಿ ಗುರು ಉಪದೇಶ ತುಂಬಿಲ್ಲ-
ಈ ಮೂವರ ಮೂಗು ಕೊಯ್ದು ಉಪ್ಪು ಸಾರಿಯ ತುಂಬಿ,
ನೆತ್ತಿಯ ಬೋಳಿಸಿ, ಕತ್ತೆಯ ನೇರಿಸಿ,
ಮೇಲೆ ಲಿಂಬಿಯ ಹುಳಿಯಂ ಬಿಟ್ಟು
ಪಡುವಲ ದಾರಿಗೆ ಹೊಡಿಯೆಂದಾತ ನಮ್ಮ ಅಂಬಿಗರ ಚೌಡಯ್ಯ-

—೫೦—

ಕೂಡಿದ ಧನವೆಲ್ಲವನು ಗುರು--ಲಿಂಗ--ಜಂಗಮಕ್ಕೆ ವಂಚನೆಯಮಾಡಿ
ಒಳಗಿಟ್ಟುಕೊಂಡ

ನೆಲಿನ ತೋಡಿ ಬಿಚ್ಚಿಟ್ಟುಕೊಂಡು, ಹಲವು ತೆರವ ಆಭರಣಂಗಳ ಮಾಡಿಸಿ
ಕರ, ಚರಣ, ಉರ, ಕರ್ಣಗಳೊಳಗಿಟ್ಟುಕೊಂಡು,
ಮತ್ತಿಷ್ಟು ಬದುಕಾಗಲೆಂದು, ತನ್ನ ಕೈಯೊಳಗಿನ ಇಷ್ಟಲಿಂಗಕ್ಕೆ,
ಅಷ್ಟ ವಿಧಾರ್ಚನೆಯಂ ಮಾಡುವ
ಲಿಂಗ ಪೂಜಕನ ಪರಿಯೆಂತೆಂದಡೆ—
ಆ ಭಕ್ತನ ಪಂಚಾಭಿಷೇಕದಿಂದ ಲಿಂಗಕ್ಕೆ ಮಜ್ಜನವ ನೀಡಿದರೆ,
ಲಿಂಗದ ಚಿತ್ತದಲ್ಲಿ ಸುಣ್ಣದ ಗತವನೆತ್ತಿ ಬಾಜಿಸಿದಂತಾಯಿತಯ್ಯಾ!
ಆ ಭಕ್ತನು ಪನ್ನೀರಿನಿಂದ ಮಜ್ಜನವ ನೀಡಿದರೆ—
ಲಿಂಗದ ಚಿತ್ತದಲ್ಲಿ ತಣ್ಣೀರೊಳಗೆದ್ದಿ ಬಾಜಿಸಿದಂತಾಯಿತಯ್ಯಾ!
ಆ ಭಕ್ತನು ವಿಭೂತಿಯ ಧರಿಸಿದರೆ—
ಲಿಂಗದ ಚಿತ್ತದಲ್ಲಿ ಬೂದಿಯ ಬೊಕ್ಕಣಕಟ್ಟಿ ಬಾಜಿಸಿದಂತಾಯಿತಯ್ಯಾ!
ಆ ಭಕ್ತನು ಗಂಧಯ ಧರಿಸಿದರೆ—
ಲಿಂಗದ ಚಿತ್ತದಲ್ಲಿ ಚಂಡಿಟ್ಟು ಬಾಜಿಸಿದಂತಾಯಿತಯ್ಯಾ!
ಆ ಭಕ್ತನು ಅಕ್ಷತೆಯ ನೇರಿಸಿದರೆ---
ಲಿಂಗದ ಚಿತ್ತದಲ್ಲಿ ಕಲ್ಲು ಹೊರಿಸಿ ಬಾಧಿಸಿದುವಂತಾಯಿತಯ್ಯಾ!
ಆ ಭಕ್ತನು ಪುಷ್ಪವ ಧರಿಸಿದರೆ----
ಲಿಂಗದ ಚಿತ್ತದಲ್ಲಿ ಬೆನ್ನ ಮೇಲೆ ಹೇರು ಹೊರಿಸಿದಂತಾಯಿತಯ್ಯಾ!
ಆ ಭಕ್ತನು ಧೂಪವ ಬೀಸಿದರೆ----
ಲಿಂಗದ ಚಿತ್ತದಲ್ಲಿ ಉದಲ್ಲಿ ಅರವನಿಕ್ಕಿ ಬಾಧಿಸಿದಂತಾಯಿತಯ್ಯಾ!
ಆ ಭಕ್ತನು ದೀಪಾರ್ತಿಯ ನೆತ್ತಿದರೆ—
ಲಿಂಗದ ಚಿತ್ತದಲ್ಲಿ ಪಂಜುಗಳ್ಳರು ಬಂದು ಮೋರೆಸುಟ್ಟು ಬಾಚಿಸಿದಂತಾಯಿತಯ್ಯಾ!
ಆ ಭಕ್ತನು ಸ್ತೋತ್ರ ಮಂತ್ರವನು ನುಡಿದರೆ—
ಲಿಂಗ ಚಿತ್ತದಲ್ಲಿ ಕರ್ಣದೊಳಗೆ ತೊನಸಿಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತಯ್ಯಾ,
ಇಂತಿಪ್ಪ ಲಿಂಗ ಬಾಧಕರನ, ಲಿಂಗ ಪೂಜೆಗೆ ಕರೆಸಬಹುದೇ?
ಆತನ ಅಂಗಳವ ಮುಟ್ಟಬಹುದೇ? ಇದರ ಇಂಗಿತವ ನಿಜ ಭಾವವುಳ್ಳ ಶರಣರು
ನೀವೇ ತಿಳಿದು ನೋಡಿರೆಂದಾತ ನಮ್ಮ ಅಂಬಿಗರ ಚೌಡಯ್ಯನು.

-೫೧-

ಅಡವಿಯೊಳಗರಸುವಡೆ, ಸಿಡಿಗಂಟೆ ತಾನಲ್ಲಿ-
ಮಡುವಿನೊಳ ಗರಸುವಡೆ ಮತ್ಸ್ಯ ಮಂಡೂಕನಲ್ಲ.
ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ.
ಅಷ್ಟ ತನುವಿನೊಳಗೆ ಹುದುಗಿರ್ಪ ಲಿಂಗವ-
ನಿಲುಕಿ ನೋಡಿಯೇ ಕಂಡ ನಂಬಿಗರ ಚೌಡಯ್ಯ.

-೫೨-

ಓದಿ ಬೋಧಿಸಿ ಇದಿರಿಂಗೆ ಹೇಳುವನ್ನವರ ಚದುರತೆಯಲ್ಲವೇ ?
ತನ್ನ ತಾನರಿದಲ್ಲಿ ಅರಿಕೆ, ಇದಿರಿಗೆ ತೋರಿದಲ್ಲಿ
ಅದೇ ದೇವತ್ವವೆಂದ ನಂಬಿಗರ ಚೌಡಯ್ಯ

-೫೩-

ಲಿಂಗ ತನುವಿಂಗೆ ಶೃಂಗಾರವಪ್ಪ ತೆರನದೆಂತೆಂದೊಡೆ-
ಕಾಮ, ಕ್ರೋಧ, ಲೋಭ, ಮೋಹಾದಿಗಳಲ್ಲಿ ತೆರಪುಗೊಡದಿಪ್ಪುದು
ಲಿಂಗವೇ ಅಂಗವಾಗಿ
ಧ್ಯಾನ ಧಾರಣ ನಿಜ ನಿವಾಸವಾಗಿ, ನಿಶ್ಚಯ ನಿಜ ತತ್ವವಾಗಿ,
ನಿಂದುದೇ ಆಭರಣವೆಂದ ನಂಬಿಗರ ಚೌಡಯ್ಯ.

-೫೪-

ಅಂದಾದ ಬಿಂದುವಿನ ಹೊಂದಿವ ಹುಟ್ಟು
ಆ ಹುಟ್ಟನೇ ಹಿಡಿದು, ಅಂದ ಚಂದದಲ್ಲಿ ತೊಳಲಾಡುತ್ತಿದ್ದಿತು ಜಗವೆಲ್ಲ.
ಅಂದಗೇಡಿಗಳೆಲ್ಲ ಬಂದೇರಿಹರು.
ಇದನೊಂದೇ ಹುಟ್ಟಿನಲ್ಲಿ ಇಳಹುವೆನೆಂದ ಅಂಬಿಗರ ಚೌಡಯ್ಯ.

-೫೫-

ಬೆಲ್ಲಕ್ಕೆ ಚದುರ ರಸವಲ್ಲದೆ,
ಸಿಹಿಂಗೆ ಚದುರ ರಸಉಂಟೇ?
ಕುರುಹಿಗೆ ಪೂಜೆಯಲ್ಲದೆ, ಅರುಹಿಗೆ ಪೂಜೆಯುಂಟೇ?
ಅರಿವು ಕರಿಗೊಂಡಲ್ಲಿ ಕಯ್ಯ ಕುರುಹು--
ಅಲ್ಲಿ ಲೋಪವೆಂದನು ನಮ್ಮ ಅಂಬಿಗರ ಚೌಡಯ್ಯನು.

— ೫೬ —

ಹರರೂಪವಾದ ನೂರೊಂದು ಸುವಿರಕ್ತರುರಿ
ಕರಸ್ತಲದ ನಾಗಿದೇವನು ಕಲ್ಲಮಠದ ಪ್ರಭು
ವರನು ವೀರಣ್ಣೊಡೆಯರುಂ ಚಾಮರಸರಾದಿ
ಶಿವಭಕ್ತತತಿಯು ನೆರೆದು
ಭರದಿಂದ ಭೋರ್ಗರೆವ ಭೇರಿ ನಿಸ್ಸಾಳ್ಗಳಿಂ
ತರತರದೊಳೊದರುತಿಹ ಕಹಳೆ ಕೌಸಾಳ್ಗಳಿಂ
ಧರೆಯೊಳಚ್ಚರಿಯೆನಿಸಿ ಮೆರೆಯಿಸಿದರಾಯಿರುಳು
ಏಕೋತ್ರಶತಸ್ಥಲವನು

— ೫೭ —

ಎಸವಿನ ಗುರುಹೋಗಿ ಶಿಶುವಧೆಯ ಮಾಡಿದ.
ಶಿಶು ಹೋಗಿ ಮರಳಿ ಗುರುವ ಕೊಂದಡೆಯು
ಹೆಸರುಗೊಂಬ ಅಣ್ಣಗಳು ನೀವು ಕೇಳಿರೋ !
ಇವರಿಬ್ಬರು ಸತ್ತ ಠಾವವೊಬ್ಬರು ಅಣಿಯರು
ನಿರ್ವಯಲೆಂದಾದ ನಂಬಿಗ ಚೌಡಯ್ಯ

— ೫೮ —

ದಿಗ್ದೆಸೆಗಳನೊಳಕೊಂಡಿಪ್ಪ ಅಖಂಡ ಚಿತ್ಪ್ರಕಾಶವೇ
ಗುರುಮೂರ್ತಿಯಾಗಿ ಬಂದ ಶಿಷ್ಯಕಾರಣವೆಂಬುದೀಗ
"ಎಸವಿನ ಗುರುಹೋಗಿ" ಎಂಬ ಶಬ್ದಕ್ಕರ್ಥ.
ಅಂತು ಗುರು ಕುರುಣಿಸಿ ಶಿಷ್ಯನ ಜೀವತತ್ತ್ವವನಳಿದು
ಶಿವತತ್ತ್ವವ ಮಾಡಿದನೆಂಬುದೀಗ ನಮ್ಮ ಅಂಬಿಗರ ಚೌಡಯ್ಯ.

— ೫೯ —

'ಎಸವಿನ ಗುರು ಹೋಗಿ ಶಿಶುವಧೆಯ ಮಾಡಿದ' ನೆಂಬ
ಶಬ್ದಕ್ಕರ್ಥ. ಅಂತು ಜೀವನ ಧರ್ಮವಳಿದು ಶಿವ
ತಾನೆಂದಣಿದ ಶಿಷ್ಯನು ಗುರುವೆಂಬ ಲಕ್ಷ್ಯದ ಭಿನ್ನವಳಿದು
ಅಭಿನ್ನಜ್ಞಾನಿಯಾಗಿರ್ದನೆಂಬುದೀಗ ನಮ್ಮ ಅಂಬಿಗರ ಚೌಡಯ್ಯ.

—೬೦—

"ಶಿಷು ಹೋಗಿ ಮರಳಿ ಗುರುವ ಕೊಂದಡೆಯು"
ಎಂಬ ಶಬ್ದಕ್ಕರ್ಥ. ಇಂತಪ್ಪ ಗುರು ಶಿಷ್ಯರಿಬ್ಬರು
ಸತ್ತುವಪ್ಪ ಪರಬ್ರಹ್ಮವೆಯಾಗಿಪ್ಪರು. ಅಂತಪ್ಪ
ಪರಬ್ರಹ್ಮದ ನಿಲವ ಗುರು ಶಿಷ್ಯರೆಂಬ
ನಾಮರೂಪುವಿಡಿದಣಿಸುವ ಭಿನ್ನಜ್ಞಾನಿಗಳರಿಯರೆಂಬುದೀಗ
ಹೆಸರುಗೊಂಬ ಅಣ್ಣಗಳು ನೀವು ಕೇಳಿರೇ !
ಇವರಿಬ್ಬರು ಸತ್ತ ಠಾವ ಒಬ್ಬರೂ ಅರಿಯರು
ನಿರ್ವಯಲೆಂಪಾತ ನಮ್ಮ ಅಂಬಿಗರ ಚೌಡಯ್ಯನು.

—೬೧—

ಗಾಳಿ ಹಡಗದಲ್ಲಿ ತೂಗಿಕೊಳ್ಳಿರೇ ! ಗಾಳಿ ನಿನ್ನಾಧೀನವಲ್ಲ
ಕಂಡಯ್ಯ !
ನಾಳೆ ತೂರಿಹೆನೆಂದಡೆ ಇಲ್ಲ ನೋಡಯ್ಯ ! ಶಿವಶರಣೆಂಬುದೊಂದು
ಗಾಳಿ ಹಡದಲ್ಲಿ ಬೇಗ ತೂರಿಂದನಂಬಿಗರ ಚೌಡಯ್ಯ.

—೬೨—

ಗಾಳಿ ಬಂದಾಗವೇ ಭತ್ತದ ಹೊಟ್ಟ ತೂರಿ
ಘಟ್ಟಯನುಳುಹಿ ಕೊಂಬಂತೆ ಹಲವು ದೇಹಂಗಳೊಳಗೆ
ಅಪೂರ್ವದ ಮನುಜ ದೇಹವ ಪಡೆದಲ್ಲಿ ಶಿವನಿಗೆ
ಶರಣುವೊಕ್ಕು ಶಿವಭಕ್ತಿಯ ಮಾಡಿ, ಭವಕರ್ಮದ
ಹೊಟ್ಟ ಕಳೆದು ಘಟ್ಟಯೆಂಬ ಮುಕ್ತಿಯ
ಪಡೆಯೆಂಬುದೀ ವಚನದ ತಾತ್ಪರ್ಯಾರ್ಥ
ನಮ್ಮ ಅಂಬಿಗರ ಚೌಡಯ್ಯ.

—೬೩—

ತನ್ನವ ಮರೆದು ದೇವರ ಕಂಡೆನೆಂಬ ಕಾರಣ
ಹರಿ ಸುರ ಬ್ರಹ್ಮಾದಿಗಳೆಲ್ಲರು ಕಲಿ ಕೆಳಗಾಗಿ ಹೋದರು!
ಆ ದೇವರ ಮರೆದು ತನ್ನುವನರಿದುದುಂಟಾದರೆ
ತಾನೆ ದಿಟವೆಂದನಂಬಿಗ ಚೌಡಯ್ಯ

--೬೪--

ತನ್ನುವ ಹುಸಿಮಾಡಿ ಇನ್ನೊಂದು ದಿಟಮಾಡುವ
ನಂಬುಗೆ ಇನ್ನಾವುದಯ್ಯಾ? ತನ್ನೊಳಗಿರ್ದ ಘನವ
ತಾ ತಿಳಿಯಲರಿಯದೆ ಪರಬ್ರಹ್ಮಕ್ಕೆ ತಲೆಯಿಕ್ಕಿ
ತೆಗೆದೆನೆಂಬ ಅಣ್ಣಾ ಗಾವಿಲನೆಂದ ನಂಬಿಗ ಚೌಡಯ್ಯ.

-೬೫--

ತನ್ನ ಜೀವಾತ್ಮನೆ ಅಂಗ, ಆ ಅಂಗದ ಚೈತನ್ಯವೇ
ಮಹಾಲಿಂಗ ಅಂತಿಪ್ಪ ಲಿಂಗಾಂಗವೆರಡೂ ಒಂದೇ
ವಸ್ತುವೆಂದು ಲಿಂಗಾಂಗಸಂಬಂಧದ ಭೇದವ ತಿಳಿದು
ಲಿಂಗವಾಗಲರಿಯದೆ, ಹುಸಿಜೀವ ತಾನೆಂದು
ಸತ್ತುಚಿತ್ತಾನಂದವುಳ್ಳುದೇ ಪರಬ್ರಹ್ಮವೆಂದು
ಭೇದವ ಮಾಡಿ, ಬ್ರಹ್ಮದ ಪರಿಪೂರ್ಣತ್ವವನರಿಯದೆ
ಅವಿಶ್ವಾಸಿಗಳಾಗಿ ಬ್ರಹ್ಮಜ್ಞಾನದಿಂದ ಸಾಧಿಸಿಹೆನೆಂಬವರೆಲ್ಲರೂ
ಬರಿಯ ಭಾಷ್ಕಳರೆಂಬುದೀ ವಚನದ ತಾತ್ಪರ್ಯಾರ್ಥ.
ಅಸುರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ;
ಬ್ರಹ್ಮಕಪಾಲವಿಲ್ಲ, ವೃಷಭವಾಹನವಿಲ್ಲ
ಋಷಿಯ ಮಗಳೊಡ ನಿರ್ದಾತನಲ್ಲ;
ಎಸಗುವ ಸಂಸಾರದ ಕುರುಹಿಲ್ಲದಾತಂಗೆ,
ಹೆಸರಾವುದೆಂದ ನಂಬಿಗರ ಚೌಡಯ್ಯ.

## ಟೀಕು

ಶಿವನು ತನ್ನ ಚಿದ್ವಿಲಾಸದಿಂದ ಮೂರ್ತಿಯಾದಲ್ಲಿ
ನಾಮವಾಯಿತ್ತಲ್ಲದೆ ಆ ಮೂರ್ತಿಯಾಗಿದ್ದ
ನಿಷ್ಕಲ ವಸ್ತುವಿಂಗೆ ಹೆಸರಿಲ್ಲ
ವೆಂಬುದೀಗ ವಚನದ ತಾತ್ಪರ್ಯ

# ಸಂಪೂರ್ಣಂ

## ಈ ರು ಆಣೆ ಬೆಲೆಯ ಪುಸ್ತಕಗಳು

೫೪ ಷಡಕ್ಷರೀಶ್ವರ ವಚನ
೫೫ ವರದ ಶಂಕರರ ಪೂಜಾ ಕಥೆ
೫೬ ಶ್ರೀ ರುದ್ರ
೫೭ ಶಿವಪೂಜಾ ವಿಧಿ
೫೮ ಸ್ತೋತ್ರ ಮಂಜರಿ
೫೯ ಸಂಪತ್ತ ಶುಕ್ರ ... ರಾಡು ಕಥೆ ವ್ರತಾ
೬೦ ದಾಸರ ಪದಗಳು
೬೧ ವಿಕ್ರಮ ಬೇತಾಳ ಕಥೆ
೬೨ ಬೋಜರಾಜ ಕಾಳಿದಾಸನ ಕಥೆಗಗಳು
೬೩ ನವಗ್ರಹ ಸ್ತೋತ್ರ ೦-೨-೦
೬೪ ಹಾರ್ಮೋನಿಯಮ್ ಶಿಕ್ಷಕಂ-೮-೦
೬೫ ಅಕ್ಬರ ಬೀರಬಲ್ಲರ ಕಥೆಗಳು
೬೬ ಮಂಗಳ ಗೌರಿ ವ್ರತ ಪೂಜಾಕಥೆ
೬೭ ಕನ್ನಡ ಇಂಗ್ಲಿಷ ಸ್ವಯಂ ಶಿಕ್ಷಕ
೬೮ ಕನ್ನಡಹಿಂದಿ ಸ್ವಯಂ ಶಿಕ್ಷಕ
೬೯ ವೀರಭದ್ರ ವಿಜಯ
೭೦ ವೀರಭದ್ರ ದೇವರ ವಡಬುಗಳು
೭೧ ಶನಿಮಹಾತ್ಮೆ (ಬೆಲೆ ೪ಆಣೆ ಪಾಕೆಟ್‌ಸೈಜ
೭೨ ಸತ್ಯ ನಾರಾಯಣ ಪೂಜಾ ಕಥೆ
೭೩ ದೇವ ಪೂಜಾ ಪದ್ಧತಿ

**ಕಾಮಶಾಸ್ತ್ರದ ಪುಸ್ತಕಗಳು**

೭೪ ಸುಖ ಸಂಸಾರ
೭೫ ಪುತ್ರ ಸಂತಾನ
೭೬ ದಾಂಪತ್ಯ ಪ್ರೇಮ
೭೭ ಕೋಕ ಶಾಸ್ತ್ರ
೭೮ ರತಿ ವಿಲಾಸ
೭೯ ಏಕಾಂತ ಸುಖ
೮೦ ನಿದ್ರಾ ವಿಲಾಸ
೮೧ ಕಾಮಶಾಸ್ತ್ರದ ಗುಟ್ಟು
೮೨ ಪೌರುಷ ಸಾಧನೆ
೮೩ ಸುಖ ಪ್ರಸೂತಿ
೮೪ ಬ್ರಹ್ಮಚರ್ಯ
೮೫ ಕಾಮ ರತಿ
೮೬ ಪ್ರಥಮ ರಾತ್ರಿ
೮೭ ಆಸನಗಳು
೮೮ ಅಸ್ವಾಭಾವಿಕ ಕಾಮತೃಪ್ತಿ
೮೯ ರತಿ ಕ್ರೀಡೆ
೯೦ ಬ್ರಹ್ಮಚರ್ಯ ಗೃಹಸ್ಥಾಶ್ರಮ
೯೧ ಕಾಮಕಲೆ
೯೨ ದಾಂಪತ್ಯ ಜೀವನ
೯೩ ಪ್ರಶ್ನೋತ್ತರ ಕಾಮಸಮಸ್ಯೆ
೯೪ ಬರ್ಥ ಕಂಟ್ರೋಲ್
೯೫ ಲೈಂಗಿಕ ರೋಗ ಚಿಕಿತ್ಸೆ
೯೬ ಕಾಮ ಸಂಭವ
೯೭ ಚುಂಬನ
೯೮ ವಿಕೃತ ಕಾಮ
೯೯ ಲವ್ ಲೆಟರ
೧೦೦ ಸ್ವಪ್ನಾವಸ್ಥೆ

— ಎ. ಎಮ್. ರಡ್ಡಿ. —

**ಬುಕ್ - ಸೇಲರ ಸ್ಟೇಶನ್, ರೋಡ, ಹುಬ್ಬಳ್ಳಿ**